# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮೇ ೧೫, ೨೦೧೪ (ವೈಶಾಖ ೨೫, ಶಕ ವರ್ಷ ೧೯೩೬)<br>Bangalore, Thursday, May 15, 2014 (Vaishakha 25, Shaka Varsha 1936) | ಸಂಚಿಕೆ ೨೦<br>Issue 20 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಕೆ.ತೀರ್ಥಪ್ಪ, ಉಪ ನಿರ್ದೇಶಕರು (ವಯೋ ನಿವೃತ್ತಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಈ ಹಿಂದೆ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘದ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣಗಳನ್ನು ಸರಬರಾಜು ಮಾಡಿ ಹಣಕಾಸಿನ ಅವ್ಯವಹಾರದಲ್ಲಿ ಬಾಗಿಯಾಗಿ ಕರ್ತವ್ಯಚ್ಯುತಿ ಕರ್ತವ್ಯಲೋಪ ದುರ್ನಡತೆ ಹಾಗೂ ನಿಯಮಗಳನ್ನು ಉಲ್ಲಂಘಿಸಿ ರೂ 28.86 ಲಕ್ಷ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಸಂಬಂಧ ಶಿಕ್ಷೆ /ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ ವಾಕೈ 69 ಕೈಸೇವಿ 2002 ದಿನಾಂಕ: 10.01.2005.
2. ಸರ್ಕಾರದ ಆದೇಶ ಸಂಖ್ಯೆ ವಾಕೈ 69 ಕೈಸೇವಿ 2002 ದಿನಾಂಕ: 14.10.2005
3. ಶ್ರೀ ಪದ್ಮನಾಭ ಕೇದಿಲಾಯ ನಿವೃತ್ತ ಜಿಲ್ಲಾ ಸೆಷನ್ ನ್ಯಾಯಾಧೀಶರ ವರದಿ ದಿನಾಂಕ: 25.02.2009
4. ಅಧಿಕಾರಿಗೆ ಕಾರಣ ಕೇಳುವ ನೋಟಿಸು ವಾಕೈ 144 ಕೈಸೇವಿ 2008 ದಿನಾಂಕ: 19.03.2009
5. ಶ್ರೀ ಕೆ.ತೀರ್ಥಪ್ಪ ಉಪ ನಿರ್ದೇಶಕರು, ಜಿಕೈಕೇ, ರಾಯಪುರ, ಧಾರವಾಡ ಇವರ ಪ್ರತಿ ಹೇಳಿಕೆ ದಿನಾಂಕ: 03.04.2009
6. 8ನೇ ಅಡಿಷನಲ್ ಚೀಫ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಬೆಂಗಳೂರು ಸಿಸಿ ನಂ 11869/2005 ದಿನಾಂಕ:08.10.2010
7. ಸರ್ಕಾರದ ಆದೇಶ ಸಂಖ್ಯೆ ವಾಕೈ 144 ಕೈಸೇವಿ 2008 ದಿನಾಂಕ: 14.12.2011
8. ವಿಧಾನ ಪರಿಷತ್ತಿನ ಭರವಸೆ ಸಮಿತಿಯ ನಡವಳಿ ದಿನಾಂಕ: 10.01.2012
9. ಶ್ರೀ ಪದ್ಮನಾಭ ಕೇದಿಲಾಯ ನಿವೃತ್ತ ಜಿಲ್ಲಾ ನ್ಯಾಯಾಧೀಶರ ಪತ್ರ ದಿನಾಂಕ: 05.05.2012
10. ಕಾರ್ಯದರ್ಶಿ, ಕರ್ನಾಟಕ ಲೋಕಾ ಸೇವಾ ಆಯೋಗ ರವರ ಪತ್ರ ಸಂಖ್ಯೆ ಪಿಎಸ್‌ಸಿ 179/ಸಿಎನ್‌ಎಸ್/13 ದಿನಾಂಕ:11.02.2014

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ತೀರ್ಥಪ್ಪ ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಈ ಹಿಂದೆ ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಭಾರತ ಜನಸಂಖ್ಯಾ ಯೋಜನೆಯಡಿ (ಐಪಿಪಿ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸದರಿ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಸ್ಥೆಯ ಮುಖಾಂತರ ರೂ 28.86 ಲಕ್ಷ ವೆಚ್ಚದಲ್ಲಿ ಸರಬರಾಜು ಮಾಡಬೇಕಾಗಿದ್ದ 2000 ಸಾಗುವಾನಿ ಬೆಂಚುಗಳಿಗೆ ಸಂಬಂಧಿಸಿದಂತೆ ಸದರಿ ಸಂಘದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಕೆ.ತೀರ್ಥಪ್ಪ ಸರಬರಾಜು ಕರಾರಿನ ನಿಬಂಧನೆಗಳನ್ನು ಉಲ್ಲಂಘಿಸಿ ಸಾಗುವಾನಿ ಬೆಂಚುಗಳ ಬದಲಾಗಿ ಶೇಕಡ 90 ರಷ್ಟು ಪ್ರಮಾಣದಲ್ಲಿ ಕಾಡು ಮರದಿಂದ (ಜಂಗಲ್ ವುಡ್) ತಯಾರಿಸಲಾದ ಬೆಂಚುಗಳನ್ನು ಸರಬರಾಜು ಮಾಡಿಸಿ ಸರಬರಾಜುದಾರ ಸಂಸ್ಥೆಗಳಿಗೆ ಹಣ ಪಾವತಿಸಿ ಸರ್ಕಾರಕ್ಕೆ ತೀವ್ರ ಆರ್ಥಿಕ ನಷ್ಟ ಉಂಟು ಮಾಡಿ ಸರ್ಕಾರಿ ನೌಕರರಿಗೆ ಸಲ್ಲದ ಮತ್ತು ಭಾರತ ದಂಡಸಂಹಿತೆ ಶಿಕ್ಷಾರ್ಹ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಶಿಸ್ತುಕ್ರಮಕ್ಕೆ ಒಳಪಡಿಸುವುದು ಜೊತೆಗೆ ಲಂಚ ನಿರೋಧಕ ಕಾಯ್ದೆ 1947 ರನ್ವಯ ಹಾಗೂ ಯೋಜನಾ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಬೆಂಗಳೂರು ರವರು ಶೇಷಾದ್ರಿಪುರಂ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 300/2003 ರಲ್ಲಿ ಪ್ರಕರಣವನ್ನು ದಾಖಲಿಸಿರುವ ಸಂಬಂಧ ಇವರ ವಿರುದ್ಧ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ತೀರ್ಥಪ್ಪ ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಈ ಹಿಂದೆ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ದರ್ಜೆಯ ಪೀಠೋಪಕರಣ ಸರಬರಾಜು ಮಾಡಿರುವ ಆರೋಪಕ್ಕೆ ಗುರಿಯಾಗಿದ್ದು, ಸದರಿ ಅಧಿಕಾರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರಡಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನಾಗಿ ಶ್ರೀ ಪದ್ಮನಾಭ ಕೇದಿಲಾಯ ನಿವೃತ್ತ ಜಿಲ್ಲಾ ನ್ಯಾಯಾಧೀಶರು ರವರನ್ನು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ನಡೆಸಿ ಶ್ರೀ ಕೆ.ತೀರ್ಥಪ್ಪ ಉಪ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 17 ಜಿಲ್ಲೆಗಳಲ್ಲಿ ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಅವಶ್ಯವಿದ್ದ 2000 ಟೀಕ್ ವುಡ್ (ಸಾಗುವಾನಿ) ಮರದ ಬೆಂಚುಗಳನ್ನು ಸರಬರಾಜು ಮಾಡಿದ ಸಂಬಂಧ ನಿಯಮಗಳನ್ನು ಪಾಲಿಸದೆ ಅಧಿಕಾರದ ದುರುಪಯೋಗ, ಕರ್ತವ್ಯಲೋಪ, ನಿರ್ಲಕ್ಷ್ಯತೆ ಮತ್ತು ನಿಯಮಗಳನ್ನು ಉಲ್ಲಂಘಿಸಿ ಹಣಕಾಸಿನ ಅವ್ಯವಹಾರದಲ್ಲಿ ಭಾಗಿಯಾಗಿ ಸರ್ಕಾರಕ್ಕೆ ಉಂಟು ಮಾಡಿರುವ ಆರ್ಥಿಕ ನಷ್ಟದ ಬಗ್ಗೆ ವಿಚಾರಣಾಧಿಕಾರಿಗಳು ದಿನಾಂಕ: 25.02.2009 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಶೇಕಡಾ 70 ರಿಂದ 90 ರಷ್ಟು ಸರಬರಾಜಾದ ಪೀಠೋಪಕರಣಗಳು ಜಂಗಲ್ ವುಡ್ ನಿಂದ ಮಾಡಿರುವುದಾಗಿ ಸರ್ಕಾರಕ್ಕೆ ಸುಮಾರು ರೂ 28.86 ಲಕ್ಷ ಉಂಟಾಗಿರುತ್ತದೆ. ಒಟ್ಟಾರೆ ಸರಬರಾಜಾದ ಎರಡು ಸಾವಿರ ಬೆಂಚುಗಳಲ್ಲಿ ಶೇ 50 ರಷ್ಟು ಮೌಲ್ಯಕ್ಕೆ ಆಪಾದಿತ ಅಧಿಕಾರಿಯ ನಿರ್ಲಕ್ಷ್ಯ ತನದಿಂದ ಬೇಜಾವ್ದಾರಿ ತನದಿಂದ ಸರ್ಕಾರಕ್ಕೆ ನಷ್ಟ ಉಂಟಾಗಿದ್ದು ಅದಕ್ಕೆ ಅವರೇ ಕಾರಣರಾಗಿರುತ್ತಾರೆ/ಹೊಣೆಗಾರರಾಗಿರುತ್ತಾರೆ. ಹಾಗೂ ನಿಯಮ, ಕಾಯ್ದೆ, ಕಾನೂನು ಉಲ್ಲಂಘಿಸಿರುತ್ತಾರೆ. ಆದುದರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ 28.86 ಲಕ್ಷಗಳಲ್ಲಿ ಶೇಕಡಾ 50 ರಷ್ಟು ಅಂದರೆ ರೂ 14.43 ಲಕ್ಷದಷ್ಟು ವಸೂಲಾತಿ ಮಾಡಲು ಹಾಗೂ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಾತಿ ಮಾಡಲು ಸದರಿ ಅಧಿಕಾರಿಯ ವಿರುದ್ಧ ಸಿವಿಲ್/ಕ್ರಿಮಿನಲ್ ಮೊಕದ್ದಮೆ ಹೂಡಲು ಹಾಗೂ ಶ್ರೀ ಕಂಠೇಶ್ವರಪ್ಪ ಸಹಾಯಕ ನಿರ್ದೇಶಕರು, ಡಿಜಿಎಸ್ & ಡಿ, ಬೆಂಗಳೂರು ಇವರು ಕೇಂದ್ರ ಸರ್ಕಾರದ ಅಧಿಕಾರಿಯಾಗಿರುವುದರಿಂದ ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಬೆಂಚುಗಳನ್ನು ಸರಬರಾಜು ಮಾಡಿರುವ ಹಣಕಾಸಿನ ಅವ್ಯವಹಾರದಲ್ಲಿ ಭಾಗಿಯಾಗಿರುವುದರಿಂದ ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಹಾಗೂ ಇತರೆ ಇಲಾಖೆಯ ಅಧಿಕಾರಿಗಳು ಆರ್ಥಿಕ ನಷ್ಟದಲ್ಲಿ ಭಾಗಿಯಾಗಿರುವುದರಿಂದ ಸದರಿ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರಿಗೆ ಕೋರಲು ಹಾಗೂ ಕಳಪೆ ಗುಣಮಟ್ಟದ ಪೀಠೋಪಕರಣಗಳನ್ನು ಸರಬರಾಜು ಮಾಡಿದ ಮೆ:ವಿನಾಯಕ ಇಂಡಸ್ಟ್ರೀಸ್ ಶಿವಮೊಗ್ಗ, ಹಾಗೂ ರಾಜು ಇಂಡಸ್ಟ್ರೀಸ್, ಶಿವಮೊಗ್ಗ ಈ ವಾಣಿಜ್ಯ ಸಂಸ್ಥೆಗಳನ್ನು ಕಪ್ಪು ಪಟ್ಟಿಗೆ ಸೇರಿಸಲು ವಿಚಾರಣಾ ವರದಿಯಲ್ಲಿ ದಾಖಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ನೈಸರ್ಗಿಕ ನ್ಯಾಯಪಾಲನಾ ಕ್ರಮವಾಗಿ ವಿಚಾರಣಾ ವರದಿಯ ಪ್ರತಿಯನ್ನು ಅಧಿಕಾರಿಗೆ ಒದಗಿಸಿ ಪ್ರತಿ ಹೇಳಿಕೆ ಸಲ್ಲಿಸಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಶ್ರೀ ಕೆ.ತೀರ್ಥಪ್ಪ ಉಪ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಪ್ರತಿ ಹೇಳಿಕೆಯನ್ನು ಸಲ್ಲಿಸಿ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಅಂಗೀಕರಿಸಲು ಬರುವುದಿಲ್ಲವೆಂದು ಏಕೆಂದರೆ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇರುವುದರಿಂದ ನ್ಯಾಯಾಲಯದಲ್ಲಿ ಪ್ರಕರಣ ಮುಕ್ತಾಯಗೊಳ್ಳುವವರೆಗೆ ಹಾಗೂ ತೀರ್ಪು ನ್ಯಾಯಾಲಯದಿಂದ ಹೊರಬರುವವರೆಗೆ ಸದರಿ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಪರಿಗಣಿಸಬಾರದೆಂದು ವರದಿಯನ್ನು ತಿರಸ್ಕರಿಸಿ ನ್ಯಾಯ ಒದಗಿಸಿಕೊಡಬೇಕೆಂದು ಸರ್ಕಾರಕ್ಕೆ ಲಿಖಿತ ಹೇಳಿಕೆ ಸಲ್ಲಿಸಿದರು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ 8ನೇ ಅಡಿಷನಲ್ ಚೀಫ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಬೆಂಗಳೂರು, ರವರು ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣಗಳನ್ನು ಸರಬರಾಜು ಮಾಡಿರುವ ಆರೋಪಗಳಿಗೆ ಸಂಬಂಧಿಸಿದಂತೆ ಈಗಾಗಲೇ ಶೇಷಾದ್ರಿಪುರಂ ಪೊಲೀಸ್ ಠಾಣೆಯಲ್ಲಿ ಅಧಿಕಾರಿಯವರ ಮತ್ತು ಇತರರ ವಿರುದ್ಧ ಕ್ರಿಮಿನಲ್ ಪ್ರಕರಣ ಮೊಕದ್ದಮೆ ಸಂಖ್ಯೆ 300/2003 ದಾಖಲಾಗಿದ್ದು, ಸದರಿ ಪೊಲೀಸ್‌ನವರು ಮಾನ್ಯ 8ನೇ ಅಡಿಷನಲ್ ಚೀಫ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಬೆಂಗಳೂರು ಇವರಿಗೆ ದೋಷಾರೋಪಣೆಯನ್ನು ಸಲ್ಲಿಸಿದ್ದು ಪ್ರಕರಣ ಸಿಸಿಎ ನಂ 11869/2006 ರಲ್ಲಿರುತ್ತದೆ. ವಿಚಾರಣೆಯ ನಂತರ ಮಾನ್ಯ ನ್ಯಾಯಾಲಯವು ದಿನಾಂಕ: 08.10.2010 ರಂದು ಅಧಿಕಾರಿ ಮತ್ತು ಇತರರ ವಿರುದ್ಧ ಮಾಡಿದ ಆರೋಪಗಳು ಸಾಬೀತಾಗಿಲ್ಲವೆಂದು ತೀರ್ಪು ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ತೀರ್ಥಪ್ಪ ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಈ ಹಿಂದೆ ಉಪ ನಿರ್ದೇಶಕರು, (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣ ಸಾಮಗ್ರಿಗಳನ್ನು ಸರಬರಾಜು ಮಾಡಿರುವ ಆರೋಪಕ್ಕೆ ಗುರಿಯಾಗಿದ್ದು, ಸದರಿ ಅಧಿಕಾರಿಯ ವಿರುದ್ಧ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ 1957 ರ ನಿಯಮ 11 (5) ರಲ್ಲಿ ಹಾಗೂ ಅದೇ ನಿಯಮದ ಉಪ ನಿಯಮ (2) ರನ್ವಯ ಪ್ರದತ್ತವಾದ ಅಧಿಕಾರದನ್ವಯ ಇಲಾಖೆ ವಿಚಾರಣೆ ಮುಂದುವರೆಸಿ Further Enquiry ನಡೆಸಲು ಸರ್ಕಾರವು ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (8) ರಲ್ಲಿ ವಿಧಾನ ಪರಿಷತ್ತಿನ ಭರವಸೆ ಸಮಿತಿಯ ನಡವಳಿ ದಿನಾಂಕ: 10.01.2012 ರಲ್ಲಿ ಭರವಸೆ ಸಂಖ್ಯೆ 1172/2012 ಕ್ಕೆ ಸಂಬಂಧಿಸಿದಂತೆ ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣಗಳನ್ನು ಸರಬರಾಜು ಮಾಡಿರುವ ಸಂಬಂಧ ಹಣಕಾಸಿನ ಅವ್ಯವಹಾರ ಎಸಗಿರುವ ಸಂಬಂಧ ಧೀರ್ಘವಾಗಿ ಚರ್ಚಿಸಿ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವಂತೆ, ಕೈಗೊಂಡ ಕ್ರಮದ ಬಗ್ಗೆ ವರದಿಯನ್ನು ಭರವಸೆ ಸಮಿತಿಗೆ ಸಲ್ಲಿಸುವಂತೆ ಸೂಚಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9) ರ ಪತ್ರದಲ್ಲಿ ವಿಚಾರಣಾಧಿಕಾರಿಯವರು ಸರ್ಕಾರದ ಆದೇಶ ಸಂಖ್ಯೆ ವಾಕೈ 144 ಕೈಸೇವಿ 2008 ದಿನಾಂಕ: 14.12.2011 ರ ಆದೇಶದಲ್ಲಿ ಶ್ರೀ ಕೆ.ತೀರ್ಥಪ್ಪ ಇವರ ವಿರುದ್ಧ ಇಲಾಖಾ ವಿಚಾರಣೆಗೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಕೆ.ಸಿ.ಎಸ್. (ಸಿಸಿಎ) ನಿಯಮ 1957 ನಿಯಮ 11 ರಡಿ ಈಗಾಗಲೇ ಇಲಾಖಾ ವಿಚಾರಣೆಯನ್ನು ಪೂರ್ಣಗೊಳಿಸಿದ್ದು ಹೊಸದಾಗಿ ವಿಚಾರಣೆಯನ್ನು ನಡೆಸುವ/ಮುಂದುವರೆಸುವ

ಅಗತ್ಯವಿರುವುದಿಲ್ಲವೆಂದು ಶಿಸ್ತು ಪ್ರಾಧಿಕಾರ/ ನೇಮಕಾತಿ ಪ್ರಾಧಿಕಾರ/ ಸಕ್ಷಮ ಪ್ರಾಧಿಕಾರವು ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಹೊಂದಿದೆ ಈ ಕಾರಣಗಳಿಂದ ವಿಚಾರಣಾಧಿಕಾರಿಗಳು ಹೊಸದಾಗಿ ಮತ್ತೊಮ್ಮೆ ವಿಚಾರಣೆ ನಡೆಸಲು ನಿರಾಕರಿಸುವುದಾಗಿ ಸರ್ಕಾರಕ್ಕೆ ತಿಳಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (10) ರ ಪತ್ರದಲ್ಲಿ ಶ್ರೀ ಕೆ.ತೀರ್ಥಪ್ಪ, ನಿವೃತ್ತ ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಭಾರತ ಜನಸಂಖ್ಯಾ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಈ ಸಂಸ್ಥೆಯಿಂದ ರೂ 28.86 ಲಕ್ಷಗಳ ವೆಚ್ಚದಲ್ಲಿ 2000 ಸಾಗುವಾನಿ ಬೆಂಚುಗಳ ಸರಬರಾಜು ಮಾಡುವ ಬದಲಾಗಿ ಶೇಕಡ 70 ರಿಂದ 90 ರಷ್ಟು ಕಾಡು ಮರಗಳಿಂದ (ಜಂಗಲ್ ವುಡ್) ತಯಾರಿಸಿದ ಪಿಠೋಪಕರಣಗಳನ್ನು ಸರಬರಾಜು ಮಾಡಿ ಶೇಕಡ 50 ರಷ್ಟು ಭಾಗಕ್ಕೆ ಅಂದರೆ ರೂ 14.43 ಲಕ್ಷಗಳ ಆರ್ಥಿಕ ನಷ್ಟಕ್ಕೆ ಹೊಣೆಗಾರರಾಗಿರುವುದರಿಂದ ಆಪಾದಿತ ಅಧಿಕಾರಿಯಿಂದ ಬಡ್ಡಿ ಸಮೇತ ಭೂಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಾತಿ ಮಾಡಲು ಅಧಿಕಾರಿಯ ವಿರುದ್ಧ ಸಿವಿಲ್/ಕ್ರಿಮಿನಲ್ ಮೊಕದ್ದಮೆ ಹೂಡಲು ಹಾಗೂ ನಿವೃತ್ತ ಅಧಿಕಾರಿಯ ಪಿಂಚಣಿಯ ಅರ್ಧದಷ್ಟನ್ನು ಮುಟ್ಟುಗೋಲು ಹಾಕಿಕೊಳ್ಳಲು ಶಿಸ್ತುಕ್ರಮ/ದಂಡನೆ ನೀಡುವ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗವು ಸಹಮತಿ ನೀಡಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ವಾಕೈ 144 ಕೈಸೇವಿ 2008 (ಭಾಗ–3) .ಬೆಂಗಳೂರು. ದಿನಾಂಕ: 03.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ತೀರ್ಥಪ್ಪ ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಈ ಹಿಂದೆ ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಇಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 17 ಜಿಲ್ಲೆಗಳಲ್ಲಿ ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಅವಶ್ಯವಿದ್ದ 2000 ಟೀಕ್ ವುಡ್ (ಸಾಗುವಾನಿ) ಮರದ ಬೆಂಚುಗಳನ್ನು ಸರಬರಾಜು ಮಾಡಿದ ಸಂಬಂಧ ಅಧಿಕಾರದ ದುರುಪಯೋಗ, ಕರ್ತವ್ಯಲೋಪ, ನಿರ್ಲಕ್ಷ್ಯತೆ ಹಣಕಾಸಿನಲ್ಲಿ ಅವ್ಯವಹಾರ ಎಸಗಿ ಶೇಕಡಾ 70 ರಿಂದ 90 ರಷ್ಟು ಸರಬರಾಜಾದ ಪೀಠೋಪಕರಣಗಳು ಜಂಗಲ್ ವುಡ್ ನಿಂದ ಮಾಡಿರುವುದಾಗಿ ಸರ್ಕಾರಕ್ಕೆ ಸುಮಾರು ರೂ 28.86 ಲಕ್ಷ (ರೂ ಇಪ್ಪತ್ತೆಂಟು ಲಕ್ಷದ ಎಂಬತ್ತಾರು ಸಾವಿರ ಮಾತ್ರ) ಆರ್ಥಿಕ ನಷ್ಟ ಉಂಟಾಗಿರುತ್ತದೆ. ಒಟ್ಟಾರೆ ಸರಬರಾಜಾದ ಎರಡು ಸಾವಿರ ಬೆಂಚುಗಳಲ್ಲಿ ಶೇ 50 ರಷ್ಟು ಮೌಲ್ಯಕ್ಕೆ ಆಪಾದಿತ ಅಧಿಕಾರಿಯ ನಿರ್ಲಕ್ಷ್ಯ ಬೇಜಾವ್ದಾರಿಯಿಂದ ಸರ್ಕಾರಕ್ಕೆ ನಷ್ಟ ಉಂಟಾಗಿದ್ದು ಅದಕ್ಕೆ ಅವರೇ ಕಾರಣರಾಗಿರುತ್ತಾರೆ ಹಾಗೂ ಹೊಣೆಗಾರರಾಗಿರುತ್ತಾರೆ. ಸದರಿಯವರು ನಿಯಮ, ಕಾಯ್ದೆ, ಕಾನೂನು ಉಲ್ಲಂಘಿಸಿರುತ್ತಾರೆ. ಆದುದರಿಂದ ಇವರ ವಿರುದ್ಧ ಈ ಕೆಳಕಂಡ ದಂಡನೆಗಳನ್ನು ವಿಧಿಸಲು ಆದೇಶಿಸಿದೆ.

1. ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ 28.86 ಲಕ್ಷಗಳಲ್ಲಿ ಶೇಕಡಾ 50 ರಷ್ಟು ಅಂದರೆ 14.43 ಲಕ್ಷಗಳನ್ನು (ರೂ ಹದಿನಾಲ್ಕು ಲಕ್ಷದ ನಲವತ್ಮೂರು ಸಾವಿರ ಮಾತ್ರ) ಬಡ್ಡಿ ಸಮೇತ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ಆಪಾದಿತ ಅಧಿಕಾರಿಯಿಂದ ವಸೂಲಾತಿ ಮಾಡಲು ಸರ್ಕಾರವು ಆದೇಶಿಸಿದೆ.
2. ಅಧಿಕಾರಿಯ ಪಿಂಚಣಿಯ ಅರ್ಧದಷ್ಟು ಮುಟ್ಟುಗೋಲು ಹಾಕಿಕೊಳ್ಳಲು ಕೆ.ಸಿ.ಎಸ್. ನಿಯಮ 214 (1) (ಎ) (ಬಿ) ರನ್ವಯ ಸರ್ಕಾರವು ಆದೇಶಿಸಿದೆ.
3. ಸದರಿ ಅಧಿಕಾರಿಯ ವಿರುದ್ಧ ಸಿವಿಲ್/ಕ್ರಿಮಿನಲ್ ಮೊಕದ್ದಮೆ ಹೂಡಲು ಸರ್ಕಾರವು ಆದೇಶಿಸಿದೆ.
4. ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣಗಳನ್ನು ಸರಬರಾಜು ಮಾಡಿದ ಮೆ: ವಿನಾಯಕ ಇಂಡಸ್ಟ್ರೀಸ್ ಶಿವಮೊಗ್ಗ, ಹಾಗೂ ಮೆ: ರಾಜು ಇಂಡಸ್ಟ್ರೀಸ್, ಶಿವಮೊಗ್ಗ ಈ ವಾಣಿಜ್ಯ ಸಂಸ್ಥೆಗಳನ್ನು ಕಪ್ಪು ಪಟ್ಟಿಗೆ ಸೇರಿಸಲು ಸರ್ಕಾರವು ಆದೇಶಿಸಿದೆ.

ಐಪಿಪಿ ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಐದು ಅಧಿಕಾರಿಗಳ ಪಾತ್ರದ ಬಗ್ಗೆ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಬಗ್ಗೆ ನಿಯಮಾನುಸಾರ ಪರಿಶೀಲಿಸಿ ಶಿಸ್ತುಕ್ರಮ ಕೈಗೊಳ್ಳಲು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**PR.386**

**SC.25**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಾಷಾಸಾಬ್, ಎಪಿಸಿ–187, ಡಿಎಆರ್, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಪನ್ನಿ/ಡಿಇ/5/2011 (ಓ..ಬಿ.ನಂ.610/2011) ದಿನಾಂಕ 24.01.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/57/ಶಿಕ್ಷೆ/2012 (ಓ.ಬಿ. ಸಂಖ್ಯೆ: 20/2013–14) ದಿನಾಂಕ 04.05.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 09.09.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)62/2013–14 ದಿನಾಂಕ 02.01.2014

**ಪ್ರಸ್ತಾವನೆ:**

ಶ್ರೀ ಬಾಷಾಸಾಬ್, ಎಪಿಸಿ–187, ಇವರು ಡಿಎಆರ್, ತುಮಕೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಲೋಪ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ದಿನಾಂಕ: 29.11.2010 ರಂದು ನಕ್ಸಲ್ ಆರೋಪಿಗಳನ್ನು ತುಮಕೂರಿನ ನ್ಯಾಯಾಲಯಕ್ಕೆ ಹಾಜರುಪಡಿಸಲು ನ್ಯಾಯಾಲಯದ ಅವರಣಕ್ಕೆ ಕರೆದುಕೊಂಡು ಬಂದಾಗ, ನೀವು ಆರೋಪಿಗಳಿಂದ ಹಣ ಪಡೆದು ಅವರಿಗೆ ಬೇಕಾಗಿದ್ದ ವಸ್ತುಗಳನ್ನು ತಂದು ಸರಬರಾಜು ಮಾಡಿ ಕರ್ತವ್ಯಲೋಪವೆಸಗಿರುತ್ತೀರಿ"

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ವಿರುದ್ಧ ಆರೋಪವು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿದ್ದು ಸದರಿ ವರದಿಯನ್ನು ಪರಿಗಣಿಸದೆ, ಶಿಸ್ತು ಪ್ರಾಧಿಕಾರವು Further Summing up ಮಾಡುವುದರ ಮೂಲಕ ಅರ್ಜಿದಾರರಿಗೆ ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಅರ್ಜಿದಾರರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 24.01.2012ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ 06 (ಆರು) ತಿಂಗಳ ಕಾಲ ಮುಂದೂಡಿ, ದಿನಾಂಕ 04.12.2010ರಿಂದ ದಿನಾಂಕ 22.03.2011ರವರೆಗಿನ ಅಮಾನತ್ತು ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 04.05.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ವಿರುದ್ಧದ ಆರೋಪವು ಸಾಬೀತಾಗಿಲ್ಲವೆಂದು ವರದಿ ನೀಡಿದ್ದು, ಸದರಿ ವರದಿಯು ಬಹಳಷ್ಟು ನ್ಯೂನ್ಯತೆಗಳಿಂದ ಕೂಡಿರುವ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನಾದೇಶವು ಆರೋಪಕ್ಕೆ ಅನುಗುಣವಾಗಿರುವ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 151 ಪೊಸಿಅ 2013 ಬೆಂಗಳೂರು, ದಿನಾಂಕ: 07.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಾಷಾಸಾಬ್, ಎಪಿಸಿ–187, ಡಿಎಆರ್, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

PR.378

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎ. ಪ್ರದೀಪ, ಮಾಜಿ ಪಿಸಿ–713, ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಇವಿ/5/2009 (ಓ.ಬಿ.ನಂ. 1226/2009) ದಿನಾಂಕ 02.11.2009

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಹಿಂಬರಹ ಸಂಖ್ಯೆ: 11/ಅಪೀಲು/ಸಿಬ್ಬಂದಿ–2/2011–12 ದಿನಾಂಕ 19.05.2011

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18.06.2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)24/2012–13 ದಿನಾಂಕ 15.03.2013

**ಪ್ರಸ್ತಾವನೆ:**

ಶ್ರೀ ಎ. ಪ್ರದೀಪ, ಮಾಜಿ ಪಿಸಿ–713, ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರು ಈ ಹಿಂದೆ ಗಾಂಧಿನಗರ ಪೊಲೀಸ್ ಠಾಣೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ದುರ್ನಡತೆ ಹಾಗೂ ಘೋರ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ಗಾಂಧಿನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ನೀವು ನಿಮ್ಮ ದೈನಂದಿನ ಠಾಣೆಯ ಕರ್ತವ್ಯಕ್ಕೆ ದಿನಾಂಕ 23.01.2009ರಿಂದ ಇಲ್ಲಿಯವರೆಗೆ ನಿಮ್ಮ ಇರುವಿಕೆಯ ಬಗ್ಗೆ ಯಾವುದೇ ಮಾಹಿತಿಯನ್ನು ನೀಡದೇ ನೀವು ಠಾಣಾ ಕರ್ತವ್ಯಕ್ಕೆ ಹಾಜರಾಗದೇ ಅವಧಿ ಮೀರಿ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾದ ಕಾರಣ ಪಿ.ಎಸ್.ಐ., ಗಾಂಧಿನಗರ ಪೊಲೀಸ್ ಠಾಣೆ ರವರ ವರದಿ ನಂ. ಜಿಎನ್.ಪಿ.ಎಸ್.ಸಿಸಿಡಿ/46/2008 ದಿನಾಂಕ 15.02.2008ರಲ್ಲಿ ನಿಮ್ಮನ್ನು 'ಸೇವಾ ಪರಿತ್ಯಾಗಿ'

ಎಂದು ಪರಿಗಣಿಸುವಂತೆ ಕೋರಿದ ಮೇರೆಗೆ ಪೊಲೀಸ್ ಮ್ಯಾನುಯೆಲ್ ಭಾಗ–1ರ ಆದೇಶ ಸಂಖ್ಯೆ: 525ರ ಅನ್ವಯ (ಸೇವಾ ಪರಿತ್ಯಾಗಿ) ಎಂದು ಪರಿಗಣಿಸಿ ನಿಮಗೆ ಪುನಃ ಸರ್ಕಾರಿ ಸೇವೆಗೆ ಬರುವ ಇಚ್ಛೆಯಿದ್ದಲ್ಲಿ ಈ ನೋಟೀಸ್ ತಲುಪಿದ 7 ದಿವಸಗಳೊಳಗಾಗಿ ವಿಚಾರಣೆಗಾಗಿ ಮಾನ್ಯ ಪೊಲೀಸ್ ಅಧೀಕ್ಷಕರ ಮುಂದೆ ಹಾಜರಾಗುವಂತೆ ಸೂಚಿಸಲಾಗಿತ್ತು. ಸದರಿ ಸೇವಾ ಪರಿತ್ಯಾಗಿ ನೋಟೀಸ್‌ನ್ನು ಪಿ.ಎಸ್.ಐ., ಗಾಂಧಿನಗರ ಪೊಲೀಸ್ ಠಾಣೆರವರು ದಿನಾಂಕ 16.08.2008ರಂದು ಜಾರಿ ಮಾಡಿದ್ದು, ಜಾರಿ ಮಾಡಿಕೊಂಡು ಸುಮಾರು 1 ತಿಂಗಳು ಕಳೆದರು ನೀವು ಇದುವರೆಗೂ ಮಾನ್ಯ ಪೊಲೀಸ್ ಅಧಿಕ್ಷಕರ ಮುಂದೆ ವಿಚಾರಣೆಗೆ ಹಾಜರಾಗಿರುವುದಿಲ್ಲ. ನೀವು ಪೊಲೀಸ್ ಇಲಾಖೆಯಲ್ಲಿ ನೇಮಕಾತಿಯಾದ ಕೆಲವೇ ವರ್ಷಗಳಲ್ಲಿ ಈಗಾಗಲೇ 324 ದಿನಗಳ ಕಾಲ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ನಿಮಗೆ ಈ ಹಿಂದೆ ಮಾನ್ಯ ಪೊಲೀಸ್ ಅಧೀಕ್ಷಕರು ಹಲವಾರು ಬಾರಿ ಬೇರೆ ಬೇರೆ ಆದೇಶಗಳಲ್ಲಿ ಎಚ್ಚರಿಕೆಯನ್ನು ನೀಡಿ ಮತ್ತು ಇತ್ತೀಚೆಗಷ್ಟೆ ಮಾನ್ಯರ ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ/5/ಇ.ವಿ./08/208 (ಓ.ಬಿ.ನಂ. 48/2009) ದಿನಾಂಕ 20.01.2009ರಲ್ಲಿ ಮಾನವತೆಯ ದೃಷ್ಟಿಯಿಂದ ಹಾಗೂ ನಿಮ್ಮ ಕುಟುಂಬದವರ ಹಿತದೃಷ್ಟಿಯಿಂದ ವಿಧಿಸಲು ಉದ್ದೇಶಿಸಿದ್ದ ಘೋರವಾದ ಶಿಕ್ಷೆಯನ್ನು ಬಿಟ್ಟು ನಿಮ್ಮ ದಿನಾಂಕ 04.05.2008ರಿಂದ ದಿನಾಂಕ 02.06.2008ರವರೆಗೆ 30 ದಿನಗಳ ಹಾಗೂ ದಿನಾಂಕ 25.06.2008ರಿಂದ ದಿನಾಂಕ 12.11.2008ರವರೆಗೆ ಒಟ್ಟು 171 ದಿನಗಳ ಅನಧಿಕೃತ ಗೈರುಹಾಜರಾದ ಅವಧಿಗಳನ್ನು "ವೇತನ ರಹಿತ ರಜೆ"ಯನ್ನಾಗಿ ಪರಿಗಣಿಸಿ ಆದೇಶಿಸಿ ಕೇವಲ 3 ದಿನಗಳ ನಂತರ ಕರ್ತವ್ಯವನ್ನು ನಿರ್ವಹಿಸುವಲ್ಲಿ ಯಾವುದೇ ಆಸಕ್ತಿಯನ್ನು ತೋರದೆ ಪುನಃ ದಿನಾಂಕ 23.01.2009ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಗೈರು ಹಾಜರಾಗಿ ಕೆ.ಸಿ.ಎಸ್.ಆರ್. ರಜಾ ನಿಯಮಾವಳಿಗಳನ್ನು ಮತ್ತು ಇಲಾಖಾ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ಶಿಸ್ತಿನ ಇಲಾಖೆಯ ನೌಕರನಿಗೆ ಸಲ್ಲದ ಅತೀವ ದುರ್ನಡತೆ ಹಾಗೂ ಕರ್ತವ್ಯದಲ್ಲಿ ಘೋರ ಬೇಜವಾಬ್ದಾರಿಯನ್ನು ಪ್ರದರ್ಶಿಸಿರುತ್ತೀರಿ."

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ವಿರುದ್ಧ ಆರೋಪವು ಸಾಬೀತಾದ ಕಾರಣ ಶಿಸ್ತು ಪ್ರಾಧಿಕಾರವು ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಅರ್ಜಿದಾರರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02.11.2009ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ "ಸೇವೆಯಿಂದ ವಜಾಗೊಳಿಸಿ" ಇವರ ದಿನಾಂಕ 23.01.2009ರಿಂದ ದಿನಾಂಕ 27.07.2009ರವರೆಗಿನ ಒಟ್ಟು 185 ದಿನಗಳ ಅನಧಿಕೃತ ಗೈರು ಹಾಜರಿ ಅವಧಿಯನ್ನು ಕೆ.ಸಿ.ಎಸ್. ನಿಯಮ 106(ಎ)ರನ್ವಯ "ವೇತನ ರಹಿತ ರಜೆ"ಯನ್ನಾಗಿ ಪರಿಗಣಿಸಿ ಆದೇಶಿಸಲಾಗಿದೆ.

ಈ ಆದೇಶದ ವಿರುದ್ಧ ಕಾಲವಿಳಂಬವಾಗಿ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19.05.2011ರ ಹಿಂಬರಹದಲ್ಲಿ ಮೇಲ್ಮನವಿಯನ್ನು ಕಾಲವಿಳಂಬಿತ ಮೇಲ್ಮನವಿಯೆಂದು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸಲು ಯಾವುದೇ ಸಮರ್ಥ ಕಾರಣಗಳು ಇರದ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 76 ಪೊಸಿಅ 2012 ಬೆಂಗಳೂರು, ದಿನಾಂಕ: 07.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ. ಪ್ರದೀಪ, ಮಾಜಿ ಪಿಸಿ–713, ಚನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

PR.379

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಿ. ರುದ್ರಮುನಿ, ನಿವೃತ್ತ ಪಿಎಸ್‌ಐ, ದಾವಣಗೆರೆ ಇವರ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಕುರಿತು

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಒಇ 97 ಪೊಸಿಅ 2010 ದಿನಾಂಕ 19.07.2011

2) ಶ್ರೀ ಪಿ ರುದ್ರಮುನಿ, ನಿವೃತ್ತ ಪಿಎಸ್‌ಐ, ದಾವಣಗೆರೆ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂಖ್ಯೆ: 7864/2011

3) ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶ ಸಂಖ್ಯೆ: 7864/2011 ದಿನಾಂಕ 26.08.2013

4) ಶ್ರೀ ಪಿ ರುದ್ರಮುನಿ, ನಿವೃತ್ತ ಪಿಎಸ್‌ಐ, ದಾವಣಗೆರೆ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 28/2014

5) ಉಪ ಆರಕ್ಷಕ ಮಹಾ ನಿರೀಕ್ಷಕರು, ರೈಲ್ವೇಸ್, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/06/2009–10 ದಿನಾಂಕ 10.03.2014

6) ಮಹಾ ನಿರ್ದೇಶಕರು ಮತ್ತು ಆರಕ್ಷಕರ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(3)63/2011–12 ದಿನಾಂಕ 17.03.2014

**ಪ್ರಸ್ತಾವನೆ:**

ಶ್ರೀ ಪಿ. ರುದ್ರಮುನಿ, ಮಾಜಿ ಆರ್.ಪಿ.ಎಸ್.ಐ. (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಅರಸೀಕೆರೆ ರೈಲ್ವೇ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರತರವಾದ ದುರ್ನಡತೆ, ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ದೋಷಾರೋಪಣೆಯನ್ನು ಹೊರಿಸಿ ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ವಿರುದ್ಧದ 2 ಆರೋಪಗಳಲ್ಲಿ 2ನೇ ಆರೋಪವು ಸಾಬೀತಾದ ಕಾರಣ ಶಿಸ್ತು ಪ್ರಾಧಿಕಾರವು ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಅರ್ಜಿದಾರರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಆರಕ್ಷಕ ಮಹಾ ನಿರೀಕ್ಷಕರು, ರೈಲ್ವೇಸ್, ಬೆಂಗಳೂರು ಇವರು ದಿನಾಂಕ 25.11.2009ರ ಆದೇಶದಲ್ಲಿ ಅರ್ಜಿದಾರರನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 285ರನ್ವಯ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ರೈಲ್ವೇಸ್, ಬೆಂಗಳೂರು ಇವರು ದಿನಾಂಕ 07.05.2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ. ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 19.07.2011ರ ಆದೇಶದಲ್ಲಿ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಸರ್ಕಾರವು ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಿದ ಹಿನ್ನಲೆಯಲ್ಲಿ ಅರ್ಜಿದಾರರು ಮೇಲಿನ ಮೂರೂ ಆದೇಶಗಳ ವಿರುದ್ಧ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಅರ್ಜಿ ಸಂಖ್ಯೆ 7864/2011ಅನ್ನು ದಾಖಲಿಸಿರುತ್ತಾರೆ. ಅರ್ಜಿಯನ್ನು ಪರಿಶೀಲಿಸಿದ ನ್ಯಾಯಮಂಡಳಿಯು ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ದಿನಾಂಕ 26.08.2013ರ ಆದೇಶದಲ್ಲಿ "ಶಿಸ್ತು ಪ್ರಾಧಿಕಾರವು ಅರ್ಜಿದಾರರ ಆರೋಪಗಳನ್ನು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರನ್ವಯ ವಿಚಾರಣೆಗೆ ಆದೇಶಿಸದ್ದು, ಸದರಿ ನಿಯಮಗಳ ಅಡಿಯಲ್ಲಿ ದಂಡನಾದೇಶವನ್ನು ನೀಡದೇ, ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 285ರಡಿಯಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ. ಈ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಗೊಳಿಸಿ ಕರ್ತವ್ಯಕ್ಕೆ ಪುನರ್ ನೇಮಿಸುವಂತೆ ಆದೇಶಿಸಿರುತ್ತದೆ".

ನ್ಯಾಯಮಂಡಳಿಯ ದಿನಾಂಕ 26.08.2013ರ ಆದೇಶವನ್ನು ನಿಗದಿತ ಅವಧಿಯೊಳಗೆ ಜಾರಿಗೊಳಿಸದ ಹಿನ್ನಲೆಯಲ್ಲಿ ಅರ್ಜಿದಾರರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 28/2014ಅನ್ನು ದಾಖಲಿಸಿರುತ್ತಾರೆ. ನ್ಯಾಯಮಂಡಳಿಯು ದಿನಾಂಕ 26.08.2013ರ ಆದೇಶದ ಅನುಷ್ಠಾನವು ವಿಳಂಬವಾಗಿದ್ದು, ನ್ಯಾಯಾಲಯ ನಿಂದನೆಯನ್ನು ತಪ್ಪಿಸಲು ಮೇಲೆ ಕ್ರಮ ಸಂಖ್ಯೆ: (5)ರಲ್ಲಿ ಓದಲಾದ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಿನಾಂಕ 25.11.2009ರ ಕಡ್ಡಾಯ ನಿವೃತ್ತಿ ಆದೇಶವನ್ನು ರದ್ದುಗೊಳಿಸಿ ಅರ್ಜಿದಾರರನ್ನು ಅವರು ನಿವೃತ್ತಿ ಹೊಂದುವ ದಿನಾಂಕ (31.08.2013) ವರೆಗಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಹಾಗೂ ದಿನಾಂಕ 26.08.2013ರ ನ್ಯಾಯಮಂಡಳಿಯ ಆದೇಶದನ್ವಯ ಅರ್ಜಿದಾರರ 3 ವರ್ಷಗಳ ವಾರ್ಷಿಕ ವೇತನ ಬಡ್ತಿಯನ್ನು ಮುಂದೂಡಿ ಆದೇಶವನ್ನು ಹೊರಡಿಸಿದೆ.

ಪ್ರಸ್ತುತ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿನಾಂಕ 30.08.2013ರ ಆದೇಶವನ್ನು ಅನುಷ್ಠಾನಗೊಳಿಸಲು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 214ರಲ್ಲಿ ವಿಷದಪಡಿಸಿರುವ ಅಂಶಗಳನ್ವಯ ನಿವೃತ್ತ ಸರ್ಕಾರಿ ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು / ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸಲು ಸರ್ಕಾರವು ಸಕ್ಷಮ ಪ್ರಾಧಿಕಾರವಾಗಿದ್ದು, ಈ ಸಂಬಂಧ ಸೂಕ್ತ ಆದೇಶವನ್ನು ಹೊರಡಿಸುವಂತೆ ಮೇಲೆ ಕ್ರಮ ಸಂಖ್ಯೆ: (6)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 15 ಪೊಸಿಅ 2014 ಬೆಂಗಳೂರು, ದಿನಾಂಕ: 07.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆರೋಪಿಸಿದ ಘಟನೆಯು 23.08.2008ರಲ್ಲಿ ಜರುಗಿದ್ದು ಅರ್ಜಿದಾರರು ದಿನಾಂಕ 31.08.2013ರಂದು ನಿವೃತ್ತಿ ಹೊಂದಿದ್ದು, ಸದರಿ ಪ್ರಕರಣವು ಅರ್ಜಿದಾರರ ನಿವೃತ್ತಿ ದಿನಾಂಕದಿಂದ 4 ವಷಗಳ ಹಿಂದಿನದಾಗಿದ್ದು, ಇದನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 214ರನುಸಾರ ಈ ಹಂತದಲ್ಲಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಅವಕಾಶವಿರುವುದಿಲ್ಲ. ಈ ಹಿನ್ನಲೆಯಲ್ಲಿ ಶ್ರೀ ಪಿ. ರುದ್ರಮುನಿ, ಮಾಜಿ ಆರ್.ಪಿ.ಎಸ್.ಐ. ಇವರನ್ನು ನಿರ್ದೋಷಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು-ಬಿ)

PR.380

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ.ಜೆ. ರಂಗಸ್ವಾಮಿ, ಪಿ.ಐ., ಆಂತರಿಕ ಭದ್ರತಾ ವಿಭಾಗ, ರಿಚ್‌ಮಂಡ್ ರಸ್ತೆ, ಬೆಂಗಳೂರು ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)29/2009-10 (ಒ.ಬಿ. ಸಂಖ್ಯೆ: 105/2013), ದಿನಾಂಕ 02.04.2013
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 21.06.2013
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)29/2009-10 ದಿನಾಂಕ __08.2013 ಮತ್ತು 03.10.2013

**ಪ್ರಸ್ತಾವನೆ:**

ಶ್ರೀ ಸಿ.ಜೆ. ರಂಗಸ್ವಾಮಿ, ಪಿ.ಐ., ಆಂತರಿಕ ಭದ್ರತಾ ವಿಭಾಗ, ರಿಚ್‌ಮಂಡ್ ರಸ್ತೆ, ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಪೀಣ್ಯ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಅಶಿಸ್ತು, ಉದ್ಧಟತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ

**ದೋಷಾರೋಪಣೆ:–**

"1) ಪೊಲೀಸ್ ಕಮೀಷನರ್‌ರವರ ಕಛೇರಿಯಿಂದ ಸಂ. ಬಿ13/1761/07 ದಿನಾಂಕ 10.12.2007ರಂದು ಶ್ರೀ ಸಮೀರ್ ಶೇಕ್ ಬಿನ್ ಶೇಕ್ ಅಹಮದ್‌ರವರು ಸಲ್ಲಿಸಿದ್ದ ಭಾರತೀಯ ರಹದಾರಿ ಪತ್ರದ ಅರ್ಜಿ ಮತ್ತು ದಾಖಲಾತಿಗಳನ್ನು ಪರಿಶೀಲನೆ ಮಾಡಿ, ವರದಿ ಕಳುಹಿಸಿಕೊಡುವಂತೆ ಸೂಚಿಸಿ, ನೀವು ಕರ್ತವ್ಯ ನಿರ್ವಹಿಸುತ್ತಿದ್ದ ಪೀಣ್ಯ ಪೊಲೀಸ್ ಠಾಣೆಗೆ ಕಳುಹಿಸಲಾಗಿತ್ತು. ನೀವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ದೇಶದ್ರೋಹ ಮಾಡುವಂತಹ ಆರೋಪಿಗಳಿಗೆ ಉತ್ತೇಜನ ನೀಡಿ, ರಹದಾರಿ ಪತ್ರ ಪಡೆಯಲು ಅರ್ಹರಲ್ಲದಿದ್ದರೂ ಅವರಿಗೆ ಸಹಾಯ ಮಾಡುವ ಉದ್ದೇಶದಿಂದ ದಾಖಲಾತಿಗಳ ನೈಜತೆಯ ಬಗ್ಗೆ ಕೂಲಕುಂಶವಾಗಿ ಪರಿಶೀಲಿಸದೇ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಅಶಿಸ್ತು, ಉದ್ಧಟತನ ಮತ್ತು ಬೇಜವಾಬ್ದಾರಿತನ ಎಸಗಿರುತ್ತೀರಿ.

2) ಪೊಲೀಸ್ ಕಮೀಷನರ್‌ರವರ ಕಛೇರಿಯಿಂದ ನಂ. ಬಿ13/1761/07 ದಿನಾಂಕ 10.12.2007ರಂದು ಶ್ರೀ ಸಮೀರ್ ಶೇಕ್ ಬಿನ್ ಶೇಕ್ ಅಹಮದ್‌ರವರು ಸಲ್ಲಿಸದ್ದ ಭಾರತೀಯ ರಹದಾರಿ ಪತ್ರದ ಅರ್ಜಿ ಮತ್ತು ದಾಖಲಾತಿಗಳನ್ನು ಪರಿಶೀಲನೆ ಮಾಡಿ, ಅರ್ಜಿದಾರರು ನೀಡಿದ್ದ ವಿಳಾಸದಲ್ಲಿ ವಾಸವಾಗಿದ್ದಾರೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ಅರ್ಜಿದಾರರ ವಾಸದ ಮನೆಗೆ ಭೇಟಿ ನೀಡದೆ, ಅಕ್ಕಪಕ್ಕದ ಮನೆಯವರ ಹೇಳಿಕೆಗಳನ್ನು ಪಡೆಯದೇ, ಅರ್ಜಿದಾರರು ನೀಡಿರುವ ವಿಳಾಸವು ಸುಳ್ಳಾಗಿದ್ದರೂ ಸಹ ಅವರಿಗೆ ಸಹಾಯ ಮಾಡುವ ಉದ್ದೇಶದಿಂದ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ದೇಶದ್ರೋಹ ಮಾಡುವಂತಹ ಆರೋಪಿಗಳಿಗೆ ಉತ್ತೇಜನ ನೀಡಿ, ರಹದಾರಿ ಪತ್ರ ಪಡೆಯಲು ಅರ್ಹರಲ್ಲದಿದ್ದರೂ ಅವರ ಅರ್ಜಿಯನ್ನು ಪುರಸ್ಕರಿಸಿ, ಶಿಫಾರಸ್ಸನ್ನು ಮಾಡಿ, ಕಳುಹಿಸಿ, ಸೃಷ್ಟಿಸಿದ ಸುಳ್ಳು ದಾಖಲೆ ಮತ್ತು ವಿಳಾಸಗಳಿಂದ ಒಬ್ಬ ವ್ಯಕ್ತಿ ಪಾಸ್‌ಪೋರ್ಟ್ ಹೊಂದಲು ಕಾರಣಕರ್ತರಾಗಿ ಅಂತರಾಷ್ಟ್ರೀಯ ಮಟ್ಟದಲ್ಲಿ ಸಾರ್ವಭೌಮತೆ ಮತ್ತು ವಿಶ್ವಾಸಾರ್ಹತೆಗೆ ಧಕ್ಕೆ ಬರುವಂತಹ ವಿಷಯವನ್ನು ಗಂಭೀರವಾಗಿ ಪರಿಗಣಿಸದೆ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಅಶಿಸ್ತು, ಉದ್ಧಟತನ, ಅಸಡ್ಡೆ ಮತ್ತು ಬೇಜವಾಬ್ದಾರಿತನ ಎಸಗಿರುತ್ತೀರಿ.

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02.04.2013ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ತಡೆಹಿಡಿಯಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಅಶಿಸ್ತು, ಬೇಜವಾಬ್ದಾರಿತನ ಎಸಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 78 ಪೊಸಿಅ 2013 ಬೆಂಗಳೂರು, ದಿನಾಂಕ: 30.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಜೆ. ರಂಗಸ್ವಾಮಿ, ಪಿ.ಐ., ಆಂತರಿಕ ಭದ್ರತಾ ವಿಭಾಗ, ರಿಚ್‌ಮಂಡ್ ರಸ್ತೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.381**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :–** ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ನೌಕರರಿಗೆ ನೇರ ನೇಮಕಾತಿಯಲ್ಲಿ ಕೃಪಾಂಕ ಮತ್ತು ವಯಸ್ಸಿನ ಸಡಿಲಿಕೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 2 ಇಪಿಸಿ 2008, ದಿನಾಂಕ: 12.11.2009.

2. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಪತ್ರ ಸಂಖ್ಯೆ: ಮಾನಿಮಂ 01 ಆಡಬಿ 695 ದಿನಾಂಕ: 07.12.2013.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನೌಕರರಿಗೆ ತೃಪ್ತಿಕರವಾಗಿ ಕಾರ್ಯ ನಿರ್ವಹಿಸಿದ ಪ್ರತಿ ವರ್ಷಕ್ಕೆ ಶೇ 4 ಅಂಕಗಳಂತೆ ಒಂದು ಬಾರಿಗೆ ಮಾತ್ರ ಅನ್ವಯವಾಗುವಂತೆ ಕೃಪಾಂಕವನ್ನು ನೀಡಲು ಮತ್ತು ಹೀಗೆ ನೀಡಲಾದ ಕೃಪಾಂಕವನ್ನು ಸೇರಿದಂತೆ ಅವರ ಒಟ್ಟಾರೆ ಅಂಕವು ಶೇ 100ಕ್ಕೆ ಒಳಪಟ್ಟಿರುವಂತೆ ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಪತ್ರದಲ್ಲಿ ಗುತ್ತಿಗೆ ನೌಕರರ ಸೇವೆಯನ್ನು ಮುಂದುವರಿಸುವ ಅಥವಾ ಮುಕ್ತಾಯಗೊಳಿಸುವ ಬಗ್ಗೆ ಆದೇಶ ನೀಡುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಮೇಲೆ ಓದಲಾದ (1)ರ ಆದೇಶದಲ್ಲಿನ One Time Basis ಎಂಬ ಪದಗಳನ್ನು ತೆಗೆದು ಹಾಕುವ ಹಾಗೂ ಗುತ್ತಿಗೆ ನೌಕರರು ಸಲ್ಲಿಸಿರುವ ಗರಿಷ್ಠ 15 ವರ್ಷಗಳ ಸೇವೆಗೆ ಮಾತ್ರ ಅನ್ವಯವಾಗುವಂತೆ ವರ್ಷಕ್ಕೆ ಶೇ 4 ಅಂಕಗಳನ್ನು ಕೃಪಾಂಕವಾಗಿ ನೀಡುವ ಬಗ್ಗೆ ತಿದ್ದುಪಡಿ ಆದೇಶ ಹೊರಡಿಸಲು ಹಾಗೂ ವಯೋಮಿತಿ ಸಡಿಲಿಕೆಗೆ ಒಂದು ನಿರ್ದಿಷ್ಟ ಗರಿಷ್ಠ ಮಿತಿಯನ್ನು ನಿಗಧಿಪಡಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 195 ಇಪಿಸಿ 2012 ಬೆಂಗಳೂರು, ದಿನಾಂಕ: 23-04-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಅಪಜೀ 2 ಇಪಿಸಿ 2008 ದಿನಾಂಕ: 12.11.2009ನ್ನು ಭಾಗಶ: ಮಾರ್ಪಡಿಸಿ, ಆದೇಶ ಭಾಗದ 7ನೇ ಪಂಕ್ತಿಯಲ್ಲಿರುವ One Time Basis ಎಂಬ ಪದಗಳನ್ನು ಈ ಮೂಲಕ ತೆಗೆದು ಹಾಕಲಾಗಿದೆ. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ಗುತ್ತಿಗೆ ನೌಕರರು ಸಲ್ಲಿಸಿರುವ ಗರಿಷ್ಠ 15 ವರ್ಷಗಳ ಸೇವೆಗೆ ಮಾತ್ರ ವರ್ಷಕ್ಕೆ ಶೇಕಡ 4 ಕೃಪಾಂಕಗಳನ್ನು ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಾವಳಿ 1992ರನ್ವಯ ನಿಗಧಿಗೊಳಿಸಿರುವ ವಿದ್ಯಾರ್ಹತೆಯ ಶೇಕಡವಾರು ಅಂಕಗಳೊಂದಿಗೆ ಸೇರಿಸಿ, ಅದರ ಮೊತ್ತವು ಒಟ್ಟಾರೆಯಾಗಿ ಶೇಕಡ 100ನ್ನು ಮೀರಿದಲ್ಲಿ ಶೇಕಡ 100ಕ್ಕೆ ಸೀಮಿತಗೊಳಿಸಿ ಎಲ್ಲಾ ನೇರ ನೇಮಕಾತಿಯಲ್ಲೂ ಅನುಕೂಲವಾಗುವಂತೆ ಅವಕಾಶ ನೀಡಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸೇವಾ ನಿಯಮಗಳು ಶಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 99 ಸೇನಿಎ 2014 ದಿನಾಂಕ: 10.03.2014ರಲ್ಲಿ ನೀಡಿರುವ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ಅನಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. (ಪರಿಸರ ಮತ್ತು ಜೀವಿಶಾಸ್ತ್ರ)

**PR.371**

**Sc.100**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59